

# ನಿಸರ್ಗದ ಕರೆ

## ಪ್ರಕೃತಿ ಆಧಾರಿತ ಹೊರಾಂಗಣ ಚಟುವಟಿಕೆಗಳ ಒಂದು ಸರಣಿ

ನಿಸರ್ಗ ಸಂರಕ್ಷಣೆ ಫೌಂಡೇಶನ್ (NCF)

**ಗಿಡಮರಗಳು, ಪ್ರಾಣಿ-ಪಕ್ಷಿಗಳು ಮತ್ತು ಕೀಟಗಳಿಂದ ತುಂಬಿರುವ ಹೊರಾಂಗಣವು, ಮಕ್ಕಳು ತಲ್ಲೀನತೆಯಿಂದ ಅಧ್ಯಯನ ಮಾಡಬಲ್ಲ ಮತ್ತು ಅವರ ಮನಸ್ಸನ್ನು ಸೆರೆಹಿಡಿಯುವ ಒಂದು ತರಗತಿಯಾಗಿ ರೂಪಾಂತರವಾಗಬಲ್ಲದು ಎಂಬುದು ನಿಮಗೆ ತಿಳಿದಿದೆಯೇ? ನಿಸರ್ಗದ ಕರೆ ಎಂಬುದು ವಿದ್ಯಾರ್ಥಿಗಳು ತಮ್ಮ ಸುತ್ತಮುತ್ತಲಿನ ಪರಿಸರವನ್ನು ಅನ್ವೇಷಿಸುವಂತೆ ಪ್ರೇರೇಪಿಸಲು ಮತ್ತು ಪ್ರಕೃತಿ ಬಗ್ಗೆ ಅವರ ವಿಸ್ಮಯ ಹಾಗೂ ಕುತೂಹಲವನ್ನು ಪ್ರೋತ್ಸಾಹಿಸಲು ವಿನ್ಯಾಸಗೊಳಿಸಲಾದ ಪ್ರಕೃತಿ ಆಧಾರಿತ ಚಟುವಟಿಕೆಗಳ ಒಂದು ಸರಣಿ.**

ವಿದ್ಯಾರ್ಥಿಗಳಿಗೆ, ಅದರಲ್ಲೂ ನಗರ ಪ್ರದೇಶಗಳ ವಿದ್ಯಾರ್ಥಿಗಳಿಗೆ, ಹೊರಾಂಗಣದಲ್ಲಿ ಮತ್ತು ಪ್ರಕೃತಿಯ ಮಡಿಲಲ್ಲಿ ಹೆಚ್ಚು ಸಮಯ ಕಳೆಯಲು ಅವಕಾಶವಿರುವುದಿಲ್ಲ. ಆದರೆ, ಕಿಕ್ಕಿರಿದ ನಗರ ಅಥವಾ ಪಟ್ಟಣದಲ್ಲಿ ಸಹ ಒಂದು ಸಣ್ಣ ಉದ್ಯಾನವನವು, ಖಾಲಿ ಅಥವಾ ಯಾರೂ ಬಳಸದ ಒಂದಿಷ್ಟು ಭೂಮಿ ಅಥವಾ ಶಾಲೆ ಅಥವಾ ಮನೆಯಲ್ಲಿರುವ ಉದ್ಯಾನವು ಮಕ್ಕಳಿಗೆ ಪ್ರಕೃತಿಯ ಒಂದು ಚಟುವಟಿಕೆಯ ತಾಣ (ಹಾಟ್ಸ್ಪಾಟ್)ಆಗಿ ರೂಪಾಂತರಗೊಳ್ಳಬಹುದು ! ಉದಾಹರಣೆಗೆ ಮರದತೊಗಟೆ, ಉದುರೆಲೆ ಕಸ ಮತ್ತು ಪೊದೆಗಳು ಇರುವೆ, ಕುದುರೆ ಹುಳು (ಮ್ಯಾಂಟಿಡ್ಗಳು) ಮತ್ತು ಜೇಡಗಳ ಆಶ್ರಯ ತಾಣವಾಗುತ್ತವೆ. ಕಾಂಕ್ರೀಟ್ ಗೋಡೆಗಳು ಮತ್ತು ಸಣ್ಣ ನೀರಿನ ಗುಂಡಿಗಳು ಪತಂಗಗಳು, ಜೇನ್ನೊಣಗಳು, ಕಣಜಗಳಿಗೆ, ಏರೋ ಪ್ಲೇನ್ ಚಿಟ್ಟೆ (ಡ್ರಾಗನ್ ಫ್ಲೈ) ಮತ್ತು ಕಪ್ಪೆಗಳಿಗೆ ಆವಾಸವಾಗಬಲ್ಲವು!

ಮಕ್ಕಳು ಸುಂದರ ನಿಸರ್ಗವನ್ನು ಗಮನಿಸಿ ಅನುಭವ ಪಡೆಯುವಂತೆ ಪ್ರೋತ್ಸಾಹಿಸಲು ವಿನ್ಯಾಸಗೊಳಿಸಲಾದ ಪ್ರಕೃತಿ / ಹೊರಾಂಗಣ ಚಟುವಟಿಕೆಗಳ ಸರಣಿಯನ್ನು ನಾವು ಇಲ್ಲಿ ಕೊಡುತ್ತಿದ್ದೇವೆ. ಈ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳು ಅವರ ಮನೆ, ತೋಟ, ಉದ್ಯಾನ, ಶಾಲೆಯ ಕ್ಯಾಂಪಸ್ ಮತ್ತು ಆಟದ ಮೈದಾನದ ಸುತ್ತ ನೋಡಿರಬಹುದಾದ ಅನೇಕ ಸಸ್ಯಗಳು ಮತ್ತು ಪ್ರಾಣಿಗಳನ್ನು ಒಳಗೊಂಡಿರುತ್ತವೆ.

ಈ ಚಟುವಟಿಕೆಗಳ ವಿನ್ಯಾಸವನ್ನು ಉದ್ದೇಶಪೂರ್ವಕವಾಗಿ ಸರಳವಾಗಿ ಇರಿಸಲಾಗಿದೆ. ತಂತ್ರಜ್ಞಾನ ಮತ್ತು ಗಮನ ಅತ್ತಿತ್ತ ಸೆಳೆಯುವ ಇತರ ವಸ್ತುಗಳಿಂದ ತುಂಬಿದ ಜಗತ್ತಿನಲ್ಲಿ ಮಕ್ಕಳ ಕಲಿಕೆಯು ಸಾಮಾನ್ಯವಾಗಿ ತರಗತಿ ಕೋಣೆಯ ಸೀಮಿತ ಪರಿಸರದಲ್ಲಿ ನಡೆಯುತ್ತದೆ. ಹೀಗಿರುವಾಗ, ಮಕ್ಕಳು ವ್ಯವಧಾನದಿಂದ ತಮ್ಮ ಸುತ್ತಮುತ್ತಲಿನ ಜೀವ ಜಗತ್ತಿನ ಸಮೃದ್ಧತೆ ಮತ್ತು ವೈವಿಧ್ಯತೆಯನ್ನು ಗಮನವಿಟ್ಟು ನೋಡುವುದನ್ನು ಪ್ರೋತ್ಸಾಹಿಸಲು ಮತ್ತು ನಿಸರ್ಗದ ವಿಸ್ಮಯಗಳನ್ನು ಅನುಭವಿಸುತ್ತಾ ಹೊಸತನ್ನು ಕಂಡುಹಿಡಿದ ಆನಂದವನ್ನು ಸವಿಯಲು ಸಹಾಯ ಮಾಡುವ ಗುರಿಯನ್ನು ನಾವು ಇಟ್ಟು ಕೊಂಡಿದ್ದೇವೆ.

## ಶಿಕ್ಷಕರಿಗೆ ಕಿವಿಮಾತು

- ನೀವು ವಾಸ್ತವವಾಗಿ ಚಟುವಟಿಕೆ ಕೈಗೊಳ್ಳುವ ಕೆಲವು ದಿನಗಳ ಮೊದಲು ನಿಮ್ಮ ವಿದ್ಯಾರ್ಥಿಗಳ ಜೊತೆ ಪ್ರತಿಯೊಂದು ಚಟುವಟಿಕೆಯ ವಿಷಯವನ್ನು ಹಂಚಿಕೊಳ್ಳಿ. ಚಟುವಟಿಕೆ ನಡೆಸುವ ದಿನ, ಅದನ್ನು ಆರಂಭಿಸುವ ಮುನ್ನ ಆ ವಿಷಯದ ಬಗ್ಗೆ ವಿದ್ಯಾರ್ಥಿಗಳು ತಮ್ಮ ತಿಳುವಳಿಕೆಯನ್ನು, ಕಲ್ಪನೆಗಳನ್ನು ಮತ್ತು ಪ್ರಶ್ನೆಗಳನ್ನು ಹಂಚಿಕೊಳ್ಳಲು ಪ್ರೋತ್ಸಾಹಿಸಿರಿ.
- ಪ್ರಕೃತಿಯನ್ನು ಗಮನಿಸುವುದು ಎಂದರೆ ಅವರು ತಾವು ಕಂಡ ಪ್ರತಿಯೊಂದು ಪ್ರಾಣಿ, ಗಿಡಮರ, ಪಕ್ಷಿ ಅಥವಾ ಕೀಟವನ್ನು ಗುರುತಿಸಬೇಕು ಅಥವಾ ಹೆಸರಿಸಬೇಕು ಎಂದೇನಲ್ಲ ಎಂಬುದನ್ನು ಅವರಿಗೆ ಮನವರಿಕೆ ಮಾಡಿಸಿ. ಬದಲಿಗೆ, ಈ ಚಟುವಟಿಕೆಗಳ ಉದ್ದೇಶವು ಅವರು ತಾವು ಗಮನಿಸಿದ್ದನ್ನು ತಮ್ಮದೇ ರೀತಿಯಲ್ಲಿ ಮತ್ತು ತಮಗೆ ಆರಾಮದಾಯಕ ಮಾಧ್ಯಮದಲ್ಲಿ (ಬರವಣಿಗೆ, ರೇಖಾಚಿತ್ರಗಳು, ಕವನಗಳು, ಚಿತ್ರಗಳು) ಎಷ್ಟು ಚೆನ್ನಾಗಿ ವಿವರಿಸಬಲ್ಲರು ಎಂಬುದನ್ನು ತಿಳಿಯುವುದಾಗಿದೆ. ತಮ್ಮ ಗಮನ ಸೆಳೆದ ಒಂದು ಪ್ರಾಣಿ ಅಥವಾ ಸಸ್ಯವನ್ನು ಸಾಧ್ಯವಾದಷ್ಟು ಹೆಚ್ಚು ವಿವರವಾಗಿ ವಿವರಿಸಲು ಪ್ರೋತ್ಸಾಹಿಸಿ. ನೀವು ಒಟ್ಟಿಗೆ ಗಮನಿಸಿದ ಮೊದಲ ಪ್ರಾಣಿ ಪ್ರಭೇದವನ್ನು ಕುರಿತಂತೆ ಈ ತರಹದ ಪ್ರಶ್ನೆಗಳನ್ನು ಕೇಳಿರಿ: ಈ ಕೀಟವು ಏನು ಮಾಡುತ್ತಿದೆ? ನಾವು ಅದನ್ನು ಎಲ್ಲಿ ನೋಡುತ್ತಿದ್ದೇವೆಯೋ ಆ ಸ್ಥಳವನ್ನು ವಿವರಿಸಬಲ್ಲಿರಾ? ನೀವು ಬೇರೆಡೆಯಲ್ಲಿ ಈ ಕೀಟವನ್ನು ನೋಡಿದ ನೆನಪಿದೆಯೇ? ಈ ಕೀಟವು ಬೇರೆಯಾವುದಾದರೂ ಜೀವಿಯ ಜೊತೆಯಲ್ಲಿ ಒಡನಾಡುವುದನ್ನು ನೀವು ನೋಡಿದ್ದೀರಾ? ನಿಮ್ಮ ಪ್ರಕಾರ ಈ ಕೀಟದ ಯಾವ ಗುಣ ವಿಶಿಷ್ಟವಾದದ್ದು? ಬೇರೆ ಯಾವುದೇ ಭಾಷೆಯಲ್ಲಿ ಇದರ ಹೆಸರು ನಿಮಗೆ ಗೊತ್ತಿದೆಯೇ?
- ಒಂದು ಪ್ರಕೃತಿ ಜರ್ನಲ್ ಇರಿಸಿಕೊಳ್ಳಲು ನಿಮ್ಮ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಿಸಿ. ಇದು ಒಟ್ಟಿಗೆ ಪಿನ್ನು ಹಾಕಿ ಜೋಡಿಸಿಟ್ಟ ಒಂದು ಮಗ್ಗುಲು ಖಾಲಿ ಇರುವ ಕಾಗದದ ಕೆಲವು ಹಾಳೆಗಳು ಆಗಿರಬಹುದು. ತನ್ನ ವೀಕ್ಷಣೆಗಳನ್ನು ಹೇಗೆ ದಾಖಲಿಸಬೇಕೆಂಬುದನ್ನು– ನಿರೂಪಣೆಗಳು, ಕವನಗಳು, ರೇಖಾಚಿತ್ರಗಳು, ಅಥವಾ ಆತ/ಆಕೆ ಆಸಕ್ತಿಕರ ಎಂದು ಭಾವಿಸಿದ ಒತ್ತಿದ ಸಸ್ಯ ಭಾಗಗಳನೊಳಗೊಂಡ ಕೊಲಾಜ್ – ಆಯಾ ವಿದ್ಯಾರ್ಥಿಯೇ ನಿರ್ಧರಿಸಲಿ. "ನಾನು ಒಂದು ಏರೋಪ್ಲೇನ್ ಚಿಟ್ಟೆ (dragonfly–ಡ್ರಾಗನ್ ಫ್ಲೈ) ಆಗಿದ್ದರೆ..." ಅಥವಾ "ನಾನು ಒಂದು ಆಲದ ಮರ ಆಗಿದ್ದರೆ..." ಎಂಬ ರೀತಿಯ ಪ್ರಶ್ನೆಗಳು ವಿದ್ಯಾರ್ಥಿಗಳು ಬರಹ ಆರಂಭ ಮಾಡಲು ಸಹಾಯ ಮಾಡಬಹುದು.
- ಎಲ್ಲಾ ಚಟುವಟಿಕೆಗಳನ್ನು ವಿದ್ಯಾರ್ಥಿಗಳು ಪ್ರತ್ಯೇಕವಾಗಿ ಅಥವಾ ಸಣ್ಣ ಗುಂಪುಗಳಲ್ಲಿ ಮಾಡಬಹುದು. ಪ್ರತೀ ಚಟುವಟಿಕೆಯ ಅಂತ್ಯದಲ್ಲಿ ತಮ್ಮ ವೀಕ್ಷಣೆಗಳನ್ನು ಪರಸ್ಪರ ಹಂಚಿಕೊಂಡು ಚರ್ಚಿಸಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ.

## ಕೊನೆಯ ಮಾತು

ನೀವು ಮತ್ತು ನಿಮ್ಮ ವಿದ್ಯಾರ್ಥಿಗಳು ಈ ಚಟುವಟಿಕೆಗಳನ್ನು ಆನಂದಿಸುವಿರಿ ಎಂದು ನಾವು ಭಾವಿಸುತ್ತೇವೆ. ಅವುಗಳನ್ನು ಮಾಡುವಾಗ ನಿಮ್ಮ ಅನುಭವಗಳನ್ನು ಹಾಗೂ ವಿದ್ಯಾರ್ಥಿಗಳಿಗೆ ಅವುಗಳನ್ನು ಇನ್ನಷ್ಟು ಆಕರ್ಷಕವಾಗಿ ಮಾಡುವ ಬಗ್ಗೆ ನಿಮ್ಮಿಂದ ಸಲಹೆಗಳನ್ನು ನಾವು ಎದುರು ನೋಡುತ್ತೇವೆ.

## ಕೃತಜ್ಞತೆಗಳು

ಇಲ್ಲಿ ಒಳಗೊಂಡಿರುವ ಚಟುವಟಿಕೆಗಳು ನಿಸರ್ಗದ ಕರೆಗಳು ಎಂಬ ಇನ್ನಷ್ಟು ವ್ಯಾಪಕ ಸಂಕಲನದ ಭಾಗವಾಗಿವೆ. ಎಂಟರಿಂದ 14 ವರ್ಷದ ಮಕ್ಕಳಿಗೆ ಪ್ರಕೃತಿ / ಹೊರಾಂಗಣ ಚಟುವಟಿಕೆಗಳಾಗಿ ವಿನ್ಯಾಸಗೊಳಿಸಲಾದ ಈ ಶೈಕ್ಷಣಿಕ ಸಂಪನ್ಮೂಲವು ಪ್ರಕೃತಿ ಕನ್ಸರ್ವೇಷನ್ ಫೌಂಡೇಷನ್ [Nature Conservation Foundation] ಅಭಿವೃದ್ಧಿ ಪಡಿಸಿದ್ದಾಗಿದೆ. ವಿಪ್ರೊ ಅಪ್ಲೈಯಿಂಗ್ ಥಾಟ್ ಇನ್ ಸ್ಕೂಲ್ಸ್, ಬೆಂಗಳೂರು ಮೂಲಕ ಬೆಂಬಲಿತವಾಗಿದೆ. ನೇಚರ್ ಕಾಲ್ಸ್ [ನಿಸರ್ಗದ ಕರೆಗಳು] ಅಂತರ್ಜಾಲದಲ್ಲಿ ಮುಕ್ತವಾಗಿ ಲಭ್ಯವಿದೆ (www.edu.ncf-india.org), ಶಿಕ್ಷಕರು ಮುದ್ರಿಸಿ ತಮ್ಮ ತರಗತಿಗಳಲ್ಲಿ ಬಳಸಬಹುದಾದ ಹೈ ರೆಸಲ್ಯೂಶನ್ PDF ಫೈಲ್‌ನಲ್ಲಿ ಪ್ರತಿಯೊಂದು ಚಟುವಟಿಕೆಯನ್ನು ಕೊಡಲಾಗಿದೆ. ಆನ್ಲೈನ್ ಸಂಪನ್ಮೂಲವು ಪ್ರತಿಯೊಂದು ಚಟುವಟಿಕೆಯ ಅಡಿಯಲ್ಲಿ ಪಟ್ಟಿಮಾಡಲಾದ ಹೆಚ್ಚುವರಿ ಮಾಹಿತಿಯನ್ನು, ಮಕ್ಕಳು ತಮ್ಮ ವೀಕ್ಷಣೆಗಳನ್ನು ಕಳುಹಿಸಲು ಪ್ರೋತ್ಸಾಹಿಸುವ ಸ್ಪರ್ಧೆಯನ್ನು ಹೊಂದಿದೆ, ಮತ್ತು ಚಟುವಟಿಕೆಗಳ / ವಿಷಯಗಳ ಬಗ್ಗೆ ಶಿಕ್ಷಕರು ಅಥವಾ ವಿದ್ಯಾರ್ಥಿಗಳು ಹೊಂದಿರುವಂತಹ ಯಾವುದೇ ಪ್ರಶ್ನೆಗಳನ್ನು ಬರೆಯಲು ಜಾಗವನ್ನು ಒಳಗೊಂಡಿದೆ. ಈ ಚಟುವಟಿಕೆಗಳ ಒಂದು ಮುದ್ರಿತ ಪ್ರತಿಯನ್ನು ಸ್ವೀಕರಿಸಲು ಬಯಸುವ (ವಿಶೇಷವಾಗಿ ಕಳಪೆ ಅಥವಾ ವಿಶ್ವಾಸಾರ್ಹವಲ್ಲದ ಅಂತರ್ಜಾಲ ಸಂಪರ್ಕವನ್ನು ಹೊಂದಿರುವ ಪ್ರದೇಶಗಳಿಂದ) ಶಿಕ್ಷಕರು ನಿಸರ್ಗ ಸಂರಕ್ಷಣೆ ಫೌಂಡೇಶನ್ (edu@ncf-india.org) ಈ ವಿಳಾಸಕ್ಕೆ ನಮಗೆ ಪತ್ರ ಬರೆದು ಪಡೆದುಕೊಳ್ಳಬೇಕಾಗಿ ಕೋರಲಾಗಿದೆ.




**ಚಿತ್ರ 1.** ಒಂದು ಕ್ಷೇತ್ರ ದಿನಚರಿಯ ಉದಾಹರಣೆ. ಮೂಲ: ವಿಷಯ ಮತ್ತು ಸಂಶೋಧನೆ – ಪ್ರಕೃತಿ ಕನ್ಸರ್ವೇಷನ್ ಫೌಂಡೇಷನ್; ವಿನ್ಯಾಸ ಮತ್ತು ಲೇಔಟ್–ಬ್ರೈನ್ ವೇವ್ ಮ್ಯಾಗಜೀನ್. URL: www.ncf-india.org ಮತ್ತು http://www.edu.ncf-india.org/.

**ನೇಚರ್ ಕನ್ಸರ್ವೇಶನ್ ಫೌಂಡೇಶನ್** (NCF) ಎನ್ನುವುದು ಪ್ರಾಕೃತಿಕ ಪ್ರಪಂಚದ ಸಂಶೋಧನೆ ಮತ್ತು ಸಂರಕ್ಷಣೆಯ ಬಗ್ಗೆ ಮುಡಿಪಾಗಿ ದುಡಿಯುತ್ತಿರುವ ಒಂದು ಲಾಭೋದ್ದೇಶವಿಲ್ಲದ ಸಂಸ್ಥೆಯಾಗಿದೆ. NCF ನ ಶಿಕ್ಷಣ ಮತ್ತು ಸಾರ್ವಜನಿಕ ಎಂಗೇಜ್ಮೆಂಟ್ ಕಾರ್ಯಕ್ರಮವು ಪರಿಸರ ವಿಜ್ಞಾನದ ವೀಕ್ಷಣೆಯಲ್ಲಿ ಮಕ್ಕಳು ಮತ್ತು ವಯಸ್ಕರು ಭಾಗವಹಿಸಲು ಅನೇಕ ಪ್ರಾಜೆಕ್ಟುಗಳನ್ನು ನಡೆಸುತ್ತದೆ. NCF ಸಹ ಪ್ರಕೃತಿ ಶಿಕ್ಷಣ ವಸ್ತುಗಳನ್ನು ಅಭಿವೃದ್ಧಿಪಡಿಸುತ್ತದೆ, ಪ್ರದರ್ಶಿಸುತ್ತದೆ ಮತ್ತು ವಿತರಿಸುತ್ತದೆ. ಯಾವುದೇ ಪ್ರಶ್ನೆಗಳಿದ್ದರೆ, ದಯವಿಟ್ಟು edu@ncf-india.org ಸಂಪರ್ಕಿಸಿ. **ಅನುವಾದಕರು:** ಜೈಕುಮಾರ್ ಮರಿಯಪ್ಪ **ಪರಿಶೀಲನೆ:** ಮನೋಜ್ ಗೋಡ್ಬೋಲೆ